# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 369 |
| ಸದಸ್ಯರ ಹೆಸರು | : | ಶ್ರೀ ಬಿ.ಜಿ.ಪಾಟೀಲ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 10.12.2020 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹಾರಾಷ್ಟ್ರದ ಡ್ಯಾಂಗಳಿಂದ ಭೀಮಾ ನದಿಗೆ ಭಾರೀ ಪ್ರಮಾಣದಲ್ಲಿ ನೀರು ಹರಿಸಿರುವುದರಿಂದ ಕರ್ನಾಟಕ ನದಿ ತೀರದ ಗ್ರಾಮಗಳು ತತ್ತರಿಸಿ ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಮಹಾರಾಷ್ಟ್ರದ ಡ್ಯಾಂಗಳಿಂದ ನೀರು ಬಿಡುವ ಮೊದಲು ಕರ್ನಾಟಕಕ್ಕೆ ಮಾಹಿತಿ ನೀಡಲಾಗಿದೆಯೇ; ನೀಡಿದ್ದಲ್ಲಿ, ಅದರ (ಸಂಪೂರ್ಣ ವಿವರ ನೀಡುವುದು); | ಕೃಷ್ಣಾ ನದಿಗೆ ಸಂಬಂಧಿಸಿದಂತೆ ಮಹಾರಾಷ್ಟ್ರ ರಾಜ್ಯದ ಜೊತೆಗೆ ಸಮನ್ವಯತೆಯನ್ನು ಸಾಧಿಸಲು ಅಂತರಾಜ್ಯ ಸಮನ್ವಯ ಸಮಿತಿ ರಚಿಸಲಾಗಿದೆ. ಅದರಂತೆ ಮೇ ತಿಂಗಳಿನಲ್ಲಿ ಪೂರ್ವಭಾವಿಯಾಗಿ ಪ್ರಧಾನ ಕಾರ್ಯದರ್ಶಿಗಳು ಸಿಂಚನ ವಲಯ, ಮಂತ್ರಾಲಯ, ಮುಂಬೈ ಇವರು ಸಭೆ ಜರುಗಿಸಿರುತ್ತಾರೆ. |
| ಇ) | ಏಕಾಏಕಿ ಮಹಾರಾಷ್ಟ್ರದ ಡ್ಯಾಂಗಳಿಂದು ನೀರು ಬಿಡುವ ಮೊದಲು ಅಗತ್ಯ ಮಾಹಿತಿ ನೀಡುವ ಹಿನ್ನೆಲೆಯಲ್ಲಿ ಎರಡೂ ರಾಜ್ಯಗಳ ನಡುವೆ ಸಮನ್ವಯ ಸಮಿತಿ ರಚನೆ ಮಾಡುವ ಅಗತ್ಯತೆ ಕುರಿತು ಸರ್ಕಾರ ಮಹಾರಾಷ್ಟ್ರದೊಂದಿಗೆ ಚರ್ಚೆ ನಡೆಸಲು ಉದ್ದೇಶಿಸಿದೆಯೇ? ಉದ್ದೇಶಿಸಿದ್ದಲ್ಲಿ, (ವಿವರ ನಿಡುವುದು) | ಅಧೀಕ್ಷಕ ಅಭಿಯಂತರರು, ಸಾಂಗಲಿ ನೀರಾವರಿ ವೃತ್ತ, ಸಾಂಗಲಿ ಹಾಗೂ ಆಲಮಟ್ಟಿ ಜಲಾಶಯದಿಂದಲೂ ಸಹ ಪ್ರತಿದಿನ ನೀರು ಬಿಡುವ ಕುರಿತು ಮಾಹಿತಿ ವಿನಿಮಯ ಮಾಡಿಕೊಳ್ಳಲಾಗಿರುತ್ತದೆ.<br><br>ಅಧೀಕ್ಷಕ ಅಭಿಯಂತರರು, ಸಾಂಗಲಿ ನೀರಾವರಿ ವೃತ್ತ, ಸಾಂಗಲಿ ರವರು ತುರ್ತು ಸಂದರ್ಭಗಳಲ್ಲಿ ಮುಂಬರುವ ಒಳಹರಿವನ್ನು ಪರಿಗಣಿಸಿ ನೀರಿನ ಹರಿವಿನ ಮಾಹಿತಿ ಒದಗಿಸುತ್ತಿದ್ದು, ಇದರಿಂದ ಆಲಮಟ್ಟಿ ಜಲಾಶಯದ ನೀರಿನ ಮಟ್ಟವನ್ನು ಸುರಕ್ಷಿತ ಮಟ್ಟಕ್ಕೆ ಕಾಪಾಡಿಕೊಳ್ಳಲಾಗುತ್ತಿದೆ.<br><br>ಕೇಂದ್ರ ಜಲ ಆಯೋಗ ಹಾಗೂ ಮಹಾರಾಷ್ಟ್ರದ ಮಾಹಿತಿಯನ್ನು ಆಧರಿಸಿ ಆಲಮಟ್ಟಿ ಜಲಾಶಯದ ಮೇಲ್ಭಾಗ ಮತ್ತು ಕೆಳಭಾಗದ ಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪ್ರವಾಹವನ್ನು ನಿಯಂತ್ರಿಸಲಾಗಿರುತ್ತದೆ.<br><br>2020ನೇ ಸಾಲಿನಲ್ಲಿ ಕರ್ನಾಟಕದ ಹವಾಮಾನ ನಿಯಂತ್ರಣ ಹಾಗೂ ಕಂದಾಯ ಇಲಾಖೆಯವರು ಸಹ ವಿಡಿಯೋ ಕಾನ್ಫರನ್ಸ್ ಜರುಗಿಸಿ ಪ್ರವಾಹವನ್ನು ಸುಸ್ಥಿತಿಯಲ್ಲಿಡಲು ನಿರ್ದೇಶನಗಳನ್ನು ನೀಡಿದ್ದು, ಪ್ರಸಕ್ತ ಸಾಲಿನಲ್ಲಿ ಪ್ರವಾಹದಿಂದ ಯಾವುದೇ ಹೆಚ್ಚಿನ ಬಾಧಿತವಾಗದಂತೆ ನಿಯಂತ್ರಿಸಲಾಗಿದೆ. |

| | | |
|---|---|---|
| | | ಅಲ್ಲದೆ, ಮಹಾರಾಷ್ಟ್ರದಿಂದ ಭೀಮಾ ನದಿಗೆ ಪ್ರವಾಹ ನೀರು ಹರಿಸುವ ಮುಂಚಿತವಾಗಿ, ಭೀಮಾ ಬ್ಯಾರೇಜಿನ ಮೇಲ್ಭಾಗದಲ್ಲಿ ಬರುವ:<br>1) ಟಾಕಳಿ ಸಿ.ಡಬ್ಲ್ಯೂಸಿ ಮಾಪನಾ ಕೇಂದ್ರ<br>2) ಭೀಮಾ ಇರಿಗೇಷನ್ ಡಿವಿಜನ್, ಪಂಢರಾಪೂರ<br>3) ಅಧೀಕ್ಷಕ ಅಭಿಯಂತರರು, ಅಂಆಂ, ಸೋಲಾಪುರ<br>4) ಹಿಳ್ಳಿ ಬ್ಯಾರೇಜ್<br>ಹಾಗೂ ಉಜ್ಜನಿ ಜಲಾಶಯದ ತಾಂತ್ರಿಕ ಸಿಬ್ಬಂದಿಯೊಂದಿಗೆ ನಿರಂತರ ಸಂಪರ್ಕದಲ್ಲಿದ್ದು, ಮಾಹಿತಿ ಪಡೆದುಕೊಳ್ಳಲಾಗಿರುತ್ತದೆ. |

**ಸಂಖ್ಯೆ:ಜಸಂಇ 162 ಎಂಎಲ್ಎ 2020**

**(ರಮೇಶ್ ಲ. ಜಾರಕಿಹೊಳಿ)**
ಜಲಸಂಪನ್ಮೂಲ ಸಚಿವರು.